ಕರ್ನಾಟಕ ವಿಧಾನ ಪರಿಷತ್

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 663
2. ಸದಸ್ಯರ ಹೆಸರು : ಶ್ರೀ ನಸೀರ್ ಅಹ್ಮದ್ (ವಿಧಾನ ಸಭೆಯಿಂದ ಚುನಾಯಿತರಾದವರು)
3. ಉತ್ತರಿಸುವ ದಿನಾಂಕ : 17.12.2021
4. ಉತ್ತರಿಸುವ ಸಚಿವರು : ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಲಬುರಗಿ ಜಿಲ್ಲೆಯ ಅಫಜಲ್ ಪೂರ ತಾಲ್ಲೂಕು ಪಂಚಾಯತಿಯ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಒಟ್ಟು ಸಿಬ್ಬಂದಿಗಳು ಎಷ್ಟು; | 1. ಖಾಯಂ ನೌಕರರ ಸಂಖ್ಯೆ: 11<br>2. ದಿನಗೂಲಿ ಕ್ಷೇಮಾಭಿವೃದ್ಧಿ ನೌಕರರ ಸಂಖ್ಯೆ: 01.<br>3. ಗುತ್ತಿಗೆ/ಹೊರಗುತ್ತಿಗೆ ನೌಕರರ ಸಂಖ್ಯೆ:10. |
| ಆ | ಪ್ರಸ್ತುತ ತಾಲ್ಲೂಕು ಪಂಚಾಯಿತಿ ಕಛೇರಿಯಲ್ಲಿ ಸಹಾಯಕ ನಿರ್ದೇಶಕರು (ಗ್ರಾಮೀಣಾಭಿವೃದ್ಧಿ) ಆಗಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಯ ಮೇಲೆ ಪಿ.ಡಿ.ಒ ಆದಾಗಿನಿಂದ ಇಲ್ಲಿಯವರೆಗೆ ಯಾವುದಾದರೂ ದೂರುಗಳು ಹಾಗೂ ಆರೋಪಗಳು ದಾಖಲಾಗಿವೆಯೇ ಮತ್ತು ಇದ್ದಲ್ಲಿ ಈ ಬಗ್ಗೆ ಸಂಪೂರ್ಣ ಮಾಹಿತಿಯನ್ನು ನೀಡುವುದು; | ಅಫಜಲ್ ಪೂರ ತಾಲ್ಲೂಕು ಪಂಚಾಯತಿಯಲ್ಲಿ ಸಹಾಯಕ ನಿರ್ದೇಶಕ(ಗ್ರಾಮೀಣ ಉದ್ಯೋಗ) ಆಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ರಮೇಶ ಪಾಟೀಲ್ ಇವರು ಈ ಹಿಂದೆ ಬಂದರವಾಡ ಗ್ರಾಮ ಪಂಚಾಯಿತಿಯಲ್ಲಿ ಪಿ.ಡಿ.ಓ ಆಗಿ ಕಾರ್ಯನಿರ್ವಹಿಸಿದ ಅವಧಿಯಲ್ಲಿ ಮಣೂರು ಗ್ರಾಮ ಪಂಚಾಯತಿಯಲ್ಲಿ ಪ್ರಭಾರ ಪಿ.ಡಿ.ಓ ಆಗಿ ಕಾರ್ಯನಿರ್ವಹಿಸುತ್ತಿದ್ದರು. ಆ ಅವಧಿಯಲ್ಲಿ ಗ್ರಾಮ ಪಂಚಾಯಿತಿಯ ಜಾಗದಲ್ಲಿ ಅನುಮತಿ ಇಲ್ಲದೇ ನಿರ್ಮಿಸಿದ 8 ರಿಂದ 10 ಶೆಡ್ ಗಳನ್ನು ತೆರವುಗೊಳಿಸಲು ಯಾವುದೇ ಕ್ರಮ ಕೈಗೊಳ್ಳದಿರುವ ಆರೋಪದ ಮೇಲೆ ಮಾನ್ಯ ಲೋಕಾಯುಕ್ತರ ಕಛೇರಿಯಲ್ಲಿ ಪ್ರಕರಣ ದಾಖಲಾಗಿ ವಿಚಾರಣೆ ಕೈಗೊಳ್ಳಲಾಗಿರುತ್ತದೆ. ಮಾನ್ಯ ಉಪಲೋಕಾಯುಕ್ತರು ವಿಚಾರಣೆ ನಡೆಸಿ ಸಲ್ಲಿಸಿದ್ದ ವರದಿಯನ್ನು ಆಧರಿಸಿ ಆದೇಶ ಸಂಖ್ಯೆ:ಗ್ರಾಅಪ 556 ಗ್ರಾಪಂಕಾ 2016, ದಿನಾಂಕ:06.4.2018ರ ಆದೇಶದಲ್ಲಿ 4 ವಾರ್ಷಿಕ ವೇತನ ಬಡ್ತಿಗಳನ್ನು ತಡೆಹಿಡಿಯುವ |

| | | |
|---|---|---|
| | | ದಂಡನೆಯನ್ನು ವಿಧಿಸಿ ಆದೇಶಿಸಲಾಗಿತ್ತು. ಸದರಿ ಆದೇಶದ ವಿರುದ್ಧ ಮೇಲ್ಕಂಡ ನೌಕರರು ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಕಲಬುರಗಿ ಪೀಠದಲ್ಲಿ ಅರ್ಜಿ ಸಂಖ್ಯೆ:6725/2018 ನ್ನು ಸಲ್ಲಿಸಿದ್ದು, ಮಾನ್ಯ ಕೆ.ಎ.ಟಿಯು ಅಂತಿಮ ಆದೇಶದಲ್ಲಿ ದಂಡನೆಯನ್ನು ರದ್ದುಪಡಿಸಿರುತ್ತದೆ.<br><br>ಶ್ರೀ ರಮೇಶ ಪಾಟೀಲ್, ಪಂ.ಅ.ಅ ಇವರು ಜೇಷ್ಠತೆಯಲ್ಲಿ ಹಿರಿತನ ಹೊಂದಿದ್ದರಿಂದ ಸದರಿಯವರಿಗೆ ಸಹಾಯಕ ನಿರ್ದೇಶಕ(ಗ್ರಾಮೀಣ ಉದ್ಯೋಗ) ಹುದ್ದೆಗೆ ಮುಂಬಡ್ತಿ ನೀಡುವ ಕುರಿತು ದಿನಾಂಕ:24.6.2021 ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಸದರಿಯವರು ಮುಂಬಡ್ತಿಗೆ ಅರ್ಹತೆ ಹೊಂದಿದ್ದರಿಂದ, ಸಮಿತಿಯ ಶಿಫಾರಸ್ಸಿನ ಅನುಸಾರ ಶ್ರೀಯುತರನ್ನು ದಿನಾಂಕ:07.7.2021 ರ ಅಧಿಸೂಚನೆಯಲ್ಲಿ ಸಹಾಯಕ ನಿರ್ದೇಶಕ (ಗ್ರಾಮೀಣ ಉದ್ಯೋಗ) ಹುದ್ದೆಗೆ ಮುಂಬಡ್ತಿ ನೀಡಿ, ತಾಲ್ಲೂಕು ಪಂಚಾಯತ್ ಅಫಜಲ್ ಪೂರ ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಲಾಗಿದೆ. |

ಗ್ರಾಅಪ 253 ಕೆ.ಎಸ್.ಎಸ್ 21(ಇ)

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು